ಸದನದಲ್ಲಿ ಉತ್ತರಿಸುವ ಪ್ರಶ್ನೆ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಸೋಮವಾರ, ದಿನಾಂಕ: 22ನೇ ಜುಲೈ, 2019

ಬಮೂಲ್‌ಗೆ ಸಲಹೆಗಾರರ ನೇಮಕಾತಿ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) -

87 (463) ಸಹಕಾರ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಬಮೂಲ್ ರೂ.1.18 ಕೋಟಿ ನೀಡಿ ಸಲಹೆಗಾರರನ್ನು ನೇಮಕ ಮಾಡುವ ಸಂದರ್ಭದಲ್ಲಿ ರಾಜ್ಯದ ಆಡಳಿತ ಭಾಷೆಯಾದ ಕನ್ನಡ ಭಾಷೆಯ ಪತ್ರಿಕೆಗಳಲ್ಲಿ ಜಾಹೀರಾತು ನೀಡದಿರಲು ಕಾರಣವೇನು ; ಕೇವಲ ಆಂಗ್ಲ ಭಾಷೆಯಲ್ಲಿ ಮಾತ್ರವೇ ನೇಮಕ ಕುರಿತು ಜಾಹೀರಾತು ನೀಡಿ ಅರ್ಜಿ ಆಹ್ವಾನಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಈ ಕುರಿತು ಸರ್ಕಾರದ ನಿಲುವೇನು ;

(ಆ) ಆಂಗ್ಲ ಭಾಷೆಯಲ್ಲಿ ಮಾತ್ರವೇ ಜಾಹೀರಾತು ನೀಡಿ ನೇಮಕ ಮಾಡಿರುವುದು ಈ ನೇಮಕದಲ್ಲಿ ಅಕ್ರಮ ನಡೆದಿದೆ ಎಂಬುದಕ್ಕೆ ಸಾಕ್ಷಿಯಾಗಿದ್ದು ಈ ಕುರಿತು ಸರ್ಕಾರ ಯಾವ ಕ್ರಮ ಕೈಗೊಂಡಿದೆ ;

(ಇ) ಕರ್ನಾಟಕ ಸಹಕಾರ ಸಂಘಗಳ ನಿಯಮ 17(4)ರ ಪ್ರಕಾರ ದ್ವಿತೀಯ ದರ್ಜೆಯ ಸಹಾಯಕ ಅಥವಾ ಈ ಹುದ್ದೆಗೆ ಸರಿಸಮಾನ ದರ್ಜೆಯ ಹುದ್ದೆಗಳಿಗೆ ಮಾತ್ರವೇ ನೇಮಕ ಮಾಡ ಬಹುದಾಗಿದ್ದು ಬಮೂಲ್‌ಗೆ ರೂ.1.18 ಕೋಟಿ ನೀಡಿ ಸಲಹೆಗಾರರ ನೇಮಕ ಮಾಡಿದ ನೇಮಕಾತಿಯನ್ನು ರದ್ದುಗೊಳಿಸಲು ಸರ್ಕಾರ ಕೈಗೊಂಡ ಕ್ರಮವೇನು ;

(ಈ) ಬಮೂಲ್‌ಗೆ ರೂ. 1.18 ಕೋಟಿ ನೀಡಿ ಸಲಹೆಗಾರರನ್ನು ನೇಮಕ ಮಾಡಿರುವ ಸಲಹೆಗಾರರು ದ್ವಿತೀಯ ದರ್ಜೆಯ ಸಹಾಯಕ ಅಥವಾ ಈ ಹುದ್ದೆಗೆ ಸರಿಸಮಾನ ದರ್ಜೆಯ ಹುದ್ದೆಯ ಸ್ಥಾನ ಮಾನವನ್ನು ಹೊಂದಿರುತ್ತಾರೆಯೇ ; ನಿಬಂಧಕರ ಅನುಮೋದನೆ ಪಡೆಯದೆ ಮಾಡಿರುವ ನೇಮಕಾತಿಯನ್ನು ಯಾವ ಕಾಲಮಿತಿಯೊಳಗೆ ರದ್ದುಗೊಳಿಸಲಾಗುವುದು ;

(ಉ) ಈ ನೇಮಕಾತಿಯಿಂದ ಆಗಿರುವ ಆರ್ಥಿಕ ನಷ್ಟವನ್ನು ಯಾವ ಅಧಿಕಾರಿಯಿಂದ ವಸೂಲು ಮಾಡಲಾಗುತ್ತದೆ ; ಮತ್ತು ಯಾವ ಕಾಲ ಮಿತಿಯಲ್ಲಿ ವಸೂಲು ಮಾಡಲಾಗುತ್ತದೆ ; ಈ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು ?